ಮಕ್ಕಳಿಗೆ ತಂತ್ರಜ್ಞಾನ/ಮೂಲಭೂತ
ಸೌಕರ್ಯಗಳು ಲಭ್ಯವಾಗುವಂತೆ ಮಾಡುವುದರ
ಬದಲು, ಮೂಲಭೂತ ಪರಿಕಲ್ಪನೆಗಳನ್ನು
ವಿವಿಧ ಹಂತಗಳಲ್ಲಿ ಪರಿಣಾಮಕಾರಿ
ವಿಧಾನದಲ್ಲಿ ಒದಗಿಸಬೇಕು.

# ಶಿಕ್ಷಣದಲ್ಲಿ ಹಿಂದು ಮನೋಭಾವ

ರಮ್ಯಾ ಅವಕಾಶ ವಂಚಿತ ಕುಟುಂಬವೊಂದರಿಂದ ಬಂದವಳು. ಅವಳು, ಮಲ್ಲಿಯ ಒಬ್ಬಳೇ ಮಗಳು. ಅವಳ ತಂದೆ ಕೆಲವು ವರ್ಷಗಳ ಹಿಂದೆ ತೀರಿಕೊಂಡಿದ್ದಾನೆ. ತಾಯಿ ಬೆಂಗಳೂರಿನ ದಕ್ಷಿಣ ಭಾಗದಲ್ಲಿ ಮನೆಗೆಲಸ ಮಾಡಿಕೊಂಡಿದ್ದಾಳೆ. ರಮ್ಯಾಳ ಕುಟುಂಬವು ತುಮಕೂರಿನ ಬಳಿಯ ಪುಟ್ಟದೊಂದು ಹಳ್ಳಿಗೆ ಸೇರಿದೆ. ಅಲ್ಲಿ ಅವಳ ಅಜ್ಜ ಅಜ್ಜಿ ಹಾಗೂ ಸೋದರ ಮಾವ ಇದ್ದಾರೆ. ಅವಳ ಅಜ್ಜಿ ಮಾಯಮ್ಮನೂ ಮನೆಗೆಲಸ ಮಾಡುತ್ತಿದ್ದವಳೇ. ಅವಳ ಅಜ್ಜ ತನ್ನ ಹೆಂಡತಿ ಮತ್ತು ಮಗಳು ಶ್ರಮಪಟ್ಟು ದುಡಿಯುವ ಅಲ್ಪ ಆದಾಯದ ಮೇಲೆ ಜೀವಿಸುವುದರ ಜೊತೆಗೆ ಅದನ್ನು ಕುಡಿತಕ್ಕಾಗಿ ಮಿತಿಮೀರಿ ಬಳಸುತ್ತಿದ್ದ. ಇಂತಹ ಬಹುತೇಕ ಕುಟುಂಬಗಳಲ್ಲಿ ಇದೇ ಪರಿಸ್ಥಿತಿ ಇದೆ. ಅವರು ಕೆಲವು ತಿಂಗಳುಗಳ ಹಿಂದೆ ತಮ್ಮ ಊರಿಗೆ ಹಿಂದಿರುಗಿ ಹೋಗಿ ನೆಲೆಸುವವರೆಗೂ ಮಲ್ಲಿಯ ಜೊತೆಗೇ ಇದ್ದರು.

ಅವಳ ಮನೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರಲ್ಲಿ ರಮ್ಯಳದೇ ಮೊದಲ ಪೀಳಿಗೆ. ಆದರೆ ಅವಳು ಬಹಳ ಕೆಚ್ಚು ಹಾಗೂ ದೃಢಸಂಕಲ್ಪದಿಂದ ಶಿಕ್ಷಣವನ್ನು ಮುಂದುವರೆಸುತ್ತಿದ್ದಾಳೆ. ರಮ್ಯಾ ಈ ವರ್ಷದ ಆರಂಭದಲ್ಲಿ ಪದವಿ ಪೂರ್ವ ಶಿಕ್ಷಣವನ್ನು ಮುಗಿಸಿದಳು. ಆ ನಂತರ ಅವಳು ಓದನ್ನು ಮುಂದುವರೆಸುವುದು

ಅವಳ ಅಜ್ಜಿಗೆ ಇಷ್ಟವಿರಲಿಲ್ಲ. ತನ್ನ ಮೊಮ್ಮಗಳು ಊರಿಗೆ ಹಿಂದಿರುಗಬೇಕೆಂದು ಅವಳು ನಿರ್ಧರಿಸಿಬಿಟ್ಟಿದ್ದಳು. ತನಗೆ ಓದನ್ನು ಮುಂದುವರೆಸಲು ಬಿಡುವಂತೆ ಕೇವಲ ತನ್ನ ಅಜ್ಜ ಅಜ್ಜಿಯರನ್ನು ಹಾಗೂ ಸೋದರ ಮಾವನನ್ನು ಒಪ್ಪಿಸಲು ರಮ್ಯಾ ಒಂದು ತಿಂಗಳಿಗೂ ಹೆಚ್ಚು ಕಾಲ ಪಣತೊಟ್ಟು ಹೋರಾಡಬೇಕಾಯಿತು. ಕೆಲವೇ ವರ್ಷಗಳಲ್ಲಿ ಅವಳ ಮದುವೆಯನ್ನು ಮಾಡಬೇಕಾಗಿರುವುದರಿಂದ ಅವಳು ಮುಂದೆ ಓದುವುದು ವ್ಯರ್ಥವೆಂದು ಭಾವಿಸಿ ಅವರು ಅವಳ ಓದಿಗೆ ವಿರೋಧ ಒಡ್ಡುತ್ತಿದ್ದರು.

ಅಂತೂ ಕೊನೆಗೆ ರಮ್ಯಾಳ ಮನವಿಗೆ ಒಪ್ಪಿಗೆ ದೊರೆಯಿತು. ಜೀವನೋಪಾಯಕ್ಕಾಗಿ ಬೆಂಗಳೂರಿನಲ್ಲಿಯೇ ಉಳಿಯುವ ಮಲ್ಲಿಯ ನಿರ್ಧಾರ ಅವಳ ಉದ್ದೇಶಕ್ಕೆ ನೆರವಾಯಿತು. ಆದರೂ ರಮ್ಯಾ ಅದು ಹೇಗೋ ತನ್ನ ಒಟ್ಟು ಕುಟುಂಬದ ಒತ್ತಡದಿಂದ ಪಾರಾಗಿ ಓದನ್ನು ಮುಂದುವರೆಸುತ್ತಿದ್ದಾಳೆ. ಸನ್ನಿವೇಶದ ಹಿನ್ನೆಲೆಯಲ್ಲಿ ಸದ್ಯ ತನ್ನ ಮನೆಗೆ ಹತ್ತಿರವಿರುವ (ರಮ್ಯಾಳ ಕುಟುಂಬವು ವಿಧಿಸಿದ್ದ ಮಾನದಂಡಗಳಲ್ಲಿ ಕಾಲೇಜು ಮತ್ತು ಮನೆಗಳ ನಡುವಿನ ಅಂತರ ಹಾಗೂ ಸಾಮೀಪ್ಯವೂ ಒಂದಾಗಿತ್ತು) ಖಾಸಗಿ ಅನುದಾನರಹಿತ ಕಾಲೇಜೊಂದರಲ್ಲಿ ಅವಳು ಬಿ.ಕಾಂ ಮೊದಲ ವರ್ಷದಲ್ಲಿ ಓದುತ್ತಿರುವುದೇ ದೊಡ್ಡ ಸಂಗತಿ. ಅವಳ ತಾಯಿಯು ಕೆಲಸ ಮಾಡುವ ಮನೆಗಳಲ್ಲಿ ಒಂದೆರಡು ಕುಟುಂಬಗಳು ಕೂಡ ಸದುದ್ದೇಶದಿಂದ ಸ್ವಲ್ಪಮಟ್ಟಿಗಿನ ನೆರವನ್ನು ಅವಳಿಗೆ ನೀಡುತ್ತಿವೆ.

ಪದವಿ ತರಗತಿಯ ಮೊದಲ ವರ್ಷದಲ್ಲಿ ಕನ್ನಡ ಮಾಧ್ಯಮದಿಂದ ಇಂಗ್ಲಿಷ್ ಮಾಧ್ಯಮಕ್ಕೆ ಬದಲಾಯಿಸಬೇಕಾದಾಗ (ಅದು ಅನಿವಾರ್ಯವಾಗಿತ್ತು) ಅಲ್ಲಿಯ ತನಕವೂ ಕನ್ನಡ ಮಾಧ್ಯಮ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ ರಮ್ಯಾಳಿಗೆ ಬಹಳ ಕಷ್ಟವಾಯಿತು. ಮನೆಯಲ್ಲಿ ಇಂಗ್ಲಿಷ್‌ನಲ್ಲಿ ಮಾತನಾಡುವ ವಾತಾವರಣ ಇರಲಿಲ್ಲ. ಹಾಗಾಗಿ, ಇಂಗ್ಲಿಷ್ ಜೊತೆಗಿನ ಅವಳ ಹೆಣಗಾಟ ಮುಂದುವರೆದಿದೆ. ವಿದ್ಯಾಭ್ಯಾಸವನ್ನು ಮುಗಿಸಿ ತಾಯಿಯ ಕಷ್ಟವನ್ನು ಕೊನೆಗಾಣಿಸುವ ಉದ್ದೇಶವನ್ನು ಅವಳು ಹೊಂದಿದ್ದಾಳೆ. ಅದಕ್ಕಾಗಿ ಯೋಗ್ಯ ಉದ್ಯೋಗವೊಂದನ್ನು ಪಡೆಯಲು ಒಂದೇ ಮನಸ್ಸಿನಿಂದ ತನ್ನ ಪ್ರಯತ್ನವನ್ನು ಮುಂದುವರೆಸಿದ್ದಾಳೆ.

ತನ್ನ ಮನೆಯವರೊಂದಿಗಿನ ಹೋರಾಟವನ್ನು ಗೆದ್ದೆ ಅಂದುಕೊಳ್ಳುವಷ್ಟರಲ್ಲಿಯೇ ರಮ್ಯಾಳಿಗೆ ಇನ್ನೊಂದು ಸವಾಲು ಎದುರಾಗಿತ್ತು. ಅದು ಅವಳ ಕಾಲೇಜಿನಲ್ಲಿ ವಿಧಿಸಿದ ಪರಕೀಯವೆನ್ನಿಸುವ ಹಾಗೂ ಅಸಂಬದ್ಧವಾದ ನಿಯಮ. ಇದೇ ಮೊದಲ ಬಾರಿಗೆ ಅವಳು ಪ್ಯಾಂಟ್, ಜಾಕೆಟ್ ಹಾಗೂ ಟೈಗಳನ್ನು ಒಳಗೊಂಡ ಸಮವಸ್ತ್ರವನ್ನು ಕಡ್ಡಾಯವಾಗಿ ಧರಿಸಬೇಕಿತ್ತು. ಈ ತೊಂದರೆಗಳ

ಜೊತೆಗೆ, ದುರದೃಷ್ಟವೆಂಬಂತೆ ಅವಳಿಗೆ ಸಿಕ್ಕ ಸಮವಸ್ತ್ರದ ಜೊತೆ ಅವಳ ಅಳತೆಗೆ ಹೊಂದುವಂತಹುದಾಗಿರಲೇ ಇಲ್ಲ. ಇದರಿಂದ ಅವಳಿಗೆ ತುಂಬಾ ಇರುಸುಮುರುಸಾಗುತ್ತಿತ್ತು. ಕಳೆದ ಎರಡು ತಿಂಗಳುಗಳಲ್ಲಿ ರಮ್ಯಾಳ ಕಾಲೇಜು, ವಿದ್ಯಾರ್ಥಿಗಳಿಗಾಗಿ ಫ್ಯಾಷನ್ ಪೆರೇಡ್, ಕೇಶಾಲಂಕಾರ ಇತ್ಯಾದಿ ಸಹಪಠ್ಯ ಸ್ಪರ್ಧೆಗಳನ್ನು ಆಯೋಜಿಸಿತ್ತು. ಈ ಕಾಲೇಜು ವಿಧಿಸಿದ ಇಂತಹ ನಿಯಮಗಳ ಹಿಂದಿನ ಉದ್ದೇಶವನ್ನು ಅರ್ಥಮಾಡಿಕೊಳ್ಳಲು ಹೆಣಗುತ್ತಿದ್ದ ನನಗೆ ಮತ್ತು ನನ್ನ ಪತ್ನಿಗೆ ದಿಗ್ಭ್ರಮೆಯಾಯಿತು. ವಿದ್ಯಾರ್ಥಿಗಳಲ್ಲಿ ವೃತ್ತಿಪರತೆಯನ್ನು ಮೈಗೂಡಿಸಲು ಹಾಗೂ ಮುಂದೆ ಉದ್ಯೋಗಕ್ಕೆ ಸೇರಲಿರುವ ಅವರನ್ನು ಆ ದಿಸೆಯಲ್ಲಿ ತಯಾರು ಮಾಡಲು ಹೀಗೆ ಮಾಡಿದ್ದಾರೆಂದು ಭಾವಿಸಬಹುದು. ಆದರೂ ಇಂದಿನ ಪ್ರಗತಿಪರ ವೃತ್ತಿ ಸಂಸ್ಥೆಗಳಲ್ಲಿ ಹೆಚ್ಚಿನವು ತಮ್ಮ ಭಾವೀ ಉದ್ಯೋಗಿಗಳು ಇಂತಹ ದಿರಸುಗಳನ್ನು ಧರಿಸಿ ಕೆಲಸಮಾಡಬೇಕೆಂದು ನಿರೀಕ್ಷಿಸುವುದಿಲ್ಲ. ವಿದ್ಯಾರ್ಥಿಗಳು ಉದ್ಯೋಗ ಸಂಬಂಧೀ ಸಂದರ್ಶನಗಳಿಗೆ ಈ ರೀತಿ ಹಾಜರಾಗಬೇಕೆಂದು ಅವರು ನಿರೀಕ್ಷಿಸುವ ಯಾವ ಸಾಧ್ಯತೆಯೂ ಇಲ್ಲ. ಅಂದಾಗ, ಇಂತಹ ವಿಚಿತ್ರ ನಿಯಮಗಳನ್ನು ಮಾಡುವುದಾದರೂ ಏಕೆ?

ಅನಗತ್ಯವಾದರೂ ಮಹತ್ವಾಕಾಂಕ್ಷೆಯ ಆಚರಣೆಗಳೆಂದು ಬಿಂಬಿಸಲ್ಪಟ್ಟಿರುವ ಇಂತಹ ಹಲವಾರು ನಿಯಮಗಳು ಶಿಕ್ಷಣ ವ್ಯವಸ್ಥೆಯ ಉದ್ದಗಲಕ್ಕೂ ವಿವಿಧ ಮಟ್ಟಗಳಲ್ಲಿ ನುಸುಳಿಕೊಂಡಿವೆ. ಒಂದೆರಡು ಘಟನೆಗಳನ್ನು ಉಲ್ಲೇಖಿಸುವುದರ ಮೂಲಕ ಈ ಅಂಶವನ್ನು ಹೆಚ್ಚು ಸ್ಪಷ್ಟಪಡಿಸುವುದು ಸೂಕ್ತ ಎಂದು ಕಾಣುತ್ತದೆ.

ಬಹಳ ವರ್ಷಗಳ ಹಿಂದೆ, ನನ್ನ ಮಗ ಎರಡು ವರ್ಷದವನಿದ್ದಾಗ ಅವನನ್ನು ಸೇರಿಸಲು ಬಾಲವಿಹಾರವೊಂದರ ಹುಡುಕಾಟದಲ್ಲಿದ್ದೆವು. ನನ್ನ ಪತ್ನಿ, ನಮ್ಮ ಮನೆಯ ಸಮೀಪವೇ ಇದ್ದ ಬಾಲವಿಹಾರವೊಂದರ ಉಸ್ತುವಾರಿ ವಹಿಸಿದ್ದ ಮಹಿಳೆಯೊಬ್ಬರನ್ನು ಭೇಟಿಯಾದಳು. ಹತ್ತಿರವೇ ಇರುವ ಒಳ್ಳೆಯದೆಂದು ಪರಿಗಣಿಸಲ್ಪಟ್ಟ ಐಸಿಎಸ್‌ಸಿ ಪಠ್ಯಕ್ರಮ ಹೊಂದಿದ್ದ ಶಾಲೆಯೊಂದರಲ್ಲಿ ಮೊದಲನೆಯ ತರಗತಿಗೆ 'ಆಯ್ಕೆಯಾಗುವ ಹಾಗೆ' ಅವನನ್ನು ಒಂದು ವರುಷದೊಳಗೆ 'ತಯಾರು' ಮಾಡುವುದಾಗಿ ಅವರು ಭರವಸೆ ಇತ್ತರು. ತಾವು ಇನ್ನೂ ನೋಡಿಯೇ ಇರದ ಮಗುವೊಂದರ ಕುರಿತು, ಅದೇನೋ ಒಂದು ತರಹದ ಕರಾರುವಾಕ್ಕಾದ ಉತ್ಪಾದನಾ ಪ್ರಕ್ರಿಯೆಯೇನೋ ಎಂಬಂತೆ ಅಂತಹ ಖಚಿತ ನಿರ್ಣಾಯಕ ಭರವಸೆಯನ್ನು ಅವರು ನೀಡಿದ್ದು ಆಶ್ಚರ್ಯಕರವಾಗಿತ್ತು. ಮಾನವರಲ್ಲಿ ಕ್ರಿಯಾಶೀಲತೆ ಹೇಗೆ ಕೆಲಸ ಮಾಡುತ್ತದೆ, ಈ ಮಕ್ಕಳು ಬೆಳೆಯುವ ಹಂತದಲ್ಲಿ ಯಾವುದಾದರೂ ತೊಂದರೆಗಳನ್ನು ಎದುರಿಸುತ್ತಾರೆಯೇ ಎನ್ನುವ ಯಾವುದೇ ತರಹದ ಅನುಮಾನಗಳ ಲವಲೇಶವೂ ಆಕೆಯಲ್ಲಿ ಇರಲಿಲ್ಲ.

ಸಾಕಷ್ಟು ಇತ್ತೀಚೆಗೆ, ಅಂದರೆ ಎರಡು ವರ್ಷಗಳ ಹಿಂದೆ ನಾನು ಈ ಮೊದಲು ಕೆಲಸ ಮಾಡುತ್ತಿದ್ದ ಸಂಸ್ಥೆಯಲ್ಲಿನ ಕಿರಿಯ ಸಹೋದ್ಯೋಗಿಗಳಲ್ಲೊಬ್ಬರು (ಅವರೂ ಹತ್ತಿರದಲ್ಲಿಯೇ ವಾಸಿಸುತ್ತಾರೆ) ಕರೆ ಮಾಡಿದ್ದರು. ತಮ್ಮ ಮಗನನ್ನು ಸೇರಿಸಲು ನಮ್ಮ ಸುತ್ತಮುತ್ತಲಿನ ಜಾಗದಲ್ಲಿಯೇ ಎಲ್ಲಾದರೂ ಒಳ್ಳೆಯ ಬಾಲ ವಿಹಾರವಿರುವುದು ನನಗೆ ತಿಳಿದಿದೆಯೇ ಎಂದು ವಿಚಾರಿಸಿದ್ದರು. ನಾನು ಅವರಿಗೆ, ಬಾಲವಿಹಾರದಲ್ಲಿ ತರಬೇತಿ ಪಡೆದ ಶಿಕ್ಷಕರಿದ್ದಾರೆಯೇ, ಅವರಿಗೆ ನಿಜಕ್ಕೂ ಮಕ್ಕಳ ಬಗ್ಗೆ 'ಕಾಳಜಿ' ಇದೆಯೇ, ಅಲ್ಲಿ ಮಕ್ಕಳು ಬರಲು ಇಷ್ಟಪಡುವಂತಹ ವಾತಾವರಣವನ್ನು ಒದಗಿಸಲಾಗುತ್ತದೆಯೇ, ಅದರ ಅಸ್ತಿತ್ವವು ವಾಣಿಜ್ಯ ಉದ್ದೇಶಗಳನ್ನು ಮೀರಿದುದಾಗಿದೆಯೇ ಇತ್ಯಾದಿ ಕೆಲವು ಪರ್ಯಾಯ ಮಾನದಂಡಗಳನ್ನು ಗಮನಿಸುವಂತೆ ಸಲಹೆ ನೀಡಿದ್ದೆ.

ಸಾರಿಗೆ, ವಿವಿಧ ಬಣ್ಣದ ಆಕರ್ಷಕ ಸಮವಸ್ತ್ರಗಳು, ಆರನೆಯ ತರಗತಿಯಿಂದಲೇ ವಿದ್ಯಾರ್ಥಿಗಳಿಗೆ ಐಐಟಿ–ಜೆಇಇ, ಸಿಇಟಿ ಇತ್ಯಾದಿ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಿಗಳಂತಹ ಸಾಧಾರಣ ಸೌಲಭ್ಯಗಳಲ್ಲದೇ ಸಂಪೂರ್ಣ ಸುಸಜ್ಜಿತ ವಿದ್ಯುನ್ಮಾನ ಸಾಧನಗಳು, ತರಗತಿ ಕೋಣೆಗಳು, ಎಲ್ಲ ತರಗತಿಯ ಮಕ್ಕಳಿಗೂ ಕೊಡಮಾಡುವ ಐ–ಪ್ಯಾಡ್ ಮತ್ತು ಟ್ಯಾಬ್ಲೆಟ್‌ಗಳು, ಒಳಾಂಗಣ ಮತ್ತು ಹೊರಾಂಗಣ ಕ್ರೀಡಾ ಸೌಲಭ್ಯಗಳು, ಈಜುಗೊಳ, ಕಲೆ ಮತ್ತು ಸಂಗೀತ ತರಗತಿಗಳು, ಸುಸಜ್ಜಿತ ಸಭಾಂಗಣ ಮುಂತಾದ ತಾವು ಒದಗಿಸುವ ಸೌಲಭ್ಯಗಳು 'ಸರ್ವಶ್ರೇಷ್ಠವಾದವುಗಳೆಂದು – ಎಲ್ಲವೂ ಬೃಹತ್ ವೆಚ್ಚದವೇ – ಹಲವಾರು ಖಾಸಗಿ ಶಿಕ್ಷಣ ಸಂಸ್ಥೆಗಳು ನೀಡುವ ನೂರಾರು ಜಾಹೀರಾತುಗಳನ್ನು ಟೆಲಿವಿಷನ್, ಬಾನುಲಿ, ಸುದ್ದಿ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ದಿನನಿತ್ಯ ಕಾಣಬಹುದು.

ಇಂತಹ ಸ್ಪರ್ಧಾತ್ಮಕ ಬೆಳೆಸುವಿಕೆಯು ಮಗುವನ್ನು 'ಅತಿಯಾಗಿ ತೊಡಗಿಸುವ' ಅಪಾಯಕ್ಕೆ ಒಡ್ಡುತ್ತದೆ ಹಾಗೂ ಅದನ್ನು ಸಹಜವಾಗಿ ಬೆಳೆಯುವ ರೀತಿಯಿಂದ ದೂರಮಾಡುತ್ತದೆ. ಜೊತೆಗೆ ಶೈಕ್ಷಣಿಕ ಹಾಗೂ ಸಹಪಠ್ಯ ಆಯಾಮಗಳೆರಡರಲ್ಲಿಯೂ ನಿಗದಿತ, ನಿರ್ದಿಷ್ಟ ಸ್ವ–ಕೇಂದ್ರಿತ ಯಶಸ್ಸಿನ ಮಾದರಿಯೊಂದನ್ನು ಅದು ಹಿಂಬಾಲಿಸುವಂತೆ ಮಾಡುತ್ತದೆ. ಸಂಕೀರ್ಣ ಜಗತ್ತೊಂದರಲ್ಲಿ ಬೆಳೆಯುವ ಮಗು ಸಹಭಾಗಿತ್ವದ, ಒಳಗೊಳ್ಳುವಿಕೆಯ ಕಾಯಕ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕು. ಅದರ ಪರಿಣಾಮವಾಗಿ ಸಾಮಾಜಿಕ ಜೀವಿಯಾಗಿ ಬದುಕನ್ನು ನಿರ್ವಹಿಸಬೇಕು. ಆದರೆ ಆ ರೀತಿಗೆ ಇದು ಸಂಪೂರ್ಣ ವಿರುದ್ಧವಾದದ್ದು. ಕೆಲವು ವರ್ಷಗಳ ಹಿಂದೆ ಒಡಿಶಾದ ಬಾಲಕ ಬುಧಿಯಾ ಸಿಂಗ್‌ನನ್ನು ಮ್ಯಾರಥಾನ್ ಓಟದಲ್ಲಿ ಭಾಗವಹಿಸುವಂತೆ ಬಲವಂತವಾಗಿ ತರಬೇತಿಗೊಳಪಡಿಸಿದ ರೀತಿ ಮತ್ತು ಹಾಗೆ ಮಾಡಿದ ಅವನ ತರಬೇತುದಾರನ

ಕತೆ ಸಾಕಷ್ಟು ಪರಿಚಿತವಾಗಿರುವಂತಹುದು. ಈ ಕುರಿತು ಚಲನಚಿತ್ರವೂ ನಿರ್ಮಾಣವಾಗಿದೆ. ಟೆಲಿವಿಷನ್ ವಾಹಿನಿಗಳಲ್ಲಿ ಇಂದು ನಾವು ನೋಡುತ್ತಿರುವ ಹಲವಾರು ರಿಯಾಲಿಟಿ ಶೋಗಳು, ಒತ್ತಾಯಪೂರ್ವಕವಾಗಿ ತಮ್ಮ ಮಕ್ಕಳನ್ನು ಸ್ಪರ್ಧೆಗಳಿಗೆ ನೂಕುತ್ತಿರುವ ಪೋಷಕರ ಪ್ರವೃತ್ತಿಯ ಅಭಿವ್ಯಕ್ತ ರೂಪಗಳೇ ಆಗಿವೆ.

ಈ ಸನ್ನಿವೇಶದಲ್ಲಿ, ಪೋಷಕರ ಮತ್ತು ಶಿಕ್ಷಕರ ಈ ಪ್ರಯತ್ನಗಳು ಎಷ್ಟರ ಮಟ್ಟಿಗೆ ಅರ್ಥಪೂರ್ಣ? ಅವರು ಶಿಕ್ಷಣದ ಹಲವಾರು ಅನಗತ್ಯ ಸಂಗತಿಗಳ ಮೇಲೆ ಗಮನವನ್ನು ಕೇಂದ್ರೀಕರಿಸುತ್ತಿದ್ದಾರೆಯೇ? ನಮ್ಮ ಮಕ್ಕಳನ್ನು ಬೆಳೆಸಬಹುದಾದ ಪರ್ಯಾಯ ವಿಧಾನಗಳತ್ತ ನಾವು ದೃಷ್ಟಿ ಹಾಯಿಸಬೇಕೆ? ಎಂಬಂತಹ, ಅಷ್ಟೇನೂ ಹಿತಕರವಲ್ಲದ ಪ್ರಶ್ನೆಗಳು ಏಳುತ್ತವೆ. ಹಾಗೆ ಪ್ರಶ್ನೆಗಳನ್ನು ಎತ್ತುವುದು ಯೋಗ್ಯವಾಗಿಯೂ ತೋರುತ್ತದೆ.

ಸದ್ಯದ ನಮ್ಮ ಬಿರುಬೀಸಿನ ಪಯಣವನ್ನು ಒಮ್ಮೆ ನಿಲ್ಲಿಸಿ, ನಮ್ಮ ಮಕ್ಕಳು ಎಲ್ಲಿಗೆ ಹೋಗಲು ಬಯಸುತ್ತಾರೆ ಎಂಬುದರ ಕುರಿತು ಮರುನೋಟವೊಂದನ್ನು ಹಾಯಿಸುವ ಅಗತ್ಯವಿದೆ. ಪ್ರತಿಯೊಬ್ಬ ಪೋಷಕ ಅಥವಾ ಶಿಕ್ಷಕನೂ ತನಗೆ ತಾನೇ ಕೇಳಿಕೊಳ್ಳಬೇಕಾದ ಒಂದು ಸರಳ ಪ್ರಶ್ನೆಯೆಂದರೆ, ಈ ಅನಿಯಂತ್ರಿತ ಸ್ಪರ್ಧೆಯು ಅವರ ಮಕ್ಕಳನ್ನು ಎಲ್ಲಿಗೆ ಕರೆದೊಯ್ಯುತ್ತಿದೆ ಎನ್ನುವುದು: ತಮ್ಮ ಮಗುವಿಗೆ ಅದು ಹೊಂದುತ್ತದೆಯೋ ಇಲ್ಲವೋ ಎಂಬುದನ್ನು ಕೂಡ ಸಾಧಾರಣವಾಗಿ ಜನರು ವಿವೇಚಿಸುವುದಿಲ್ಲ. ಹೆಚ್ಚಿನ ಜನರು ಸವೆದ ಹಾದಿಯನ್ನೇ ಅನುಸರಿಸುವಂತೆ ತಮ್ಮನ್ನು ಒತ್ತಾಯಿಸುವ ಈ 'ಹಿಂಡು ಮನೋಭಾವ'ದ ಜಾಲದೊಳಕ್ಕೆ ಅವರು ಸದಾ ಸಿಕ್ಕಿಹಾಕಿಕೊಳ್ಳಲೇಬೇಕೇ?

ನಮ್ಮ ಆಚರಣೆಗಳ ಮರುಮೌಲ್ಯಮಾಪನವನ್ನು ಕೈಗೊಳ್ಳಲು ಒಂದು ಮಾರ್ಗವಿದೆ. ಅದು, ಅಷ್ಟೇನೂ ಹಿತವಾಗಿರದಿದ್ದರೂ ಕೆಲವು ಪ್ರಸ್ತುತ ಪ್ರಶ್ನೆಗಳನ್ನು ಕೇಳುವುದು. ಇತ್ತೀಚೆಗೆ ರಾಜ್ಯದ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳೊಡನೆ ನಾವು ಸಭೆಗಳನ್ನು ನಡೆಸಿದೆವು. ನಮ್ಮ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಮಾಡುವ ಬರವಣಿಗೆ ಕಾರ್ಯದ ಪ್ರಮಾಣವನ್ನು ಹೇಗೆ ಹೆಚ್ಚಿಸಬಹುದು ಎನ್ನುವುದು ಚರ್ಚೆಯ ವಿಷಯವಾಗಿತ್ತು. ಬಹಳಷ್ಟು ಶಾಲೆಗಳಲ್ಲಿ ಹಿಂದೆ ಬಳಕೆಯಲ್ಲಿದ್ದ ಅನೇಕ ರೀತಿಗಳು ಈಗ ಚರಿತ್ರೆಗೆ ಸೇರಿವೆ. ಅವುಗಳಲ್ಲಿ ಸ್ಲೇಟು ಮತ್ತು ಬಳಪದ ಬಳಕೆಯೂ ಒಂದು. ಮಕ್ಕಳ ಬರವಣಿಗೆಯ ಕೌಶಲವನ್ನು ಹೆಚ್ಚಿಸುವುದಕ್ಕಾಗಿ ಕಿರಿಯ ಪ್ರಾಥಮಿಕ ಹಂತದಲ್ಲಿ ಸ್ಲೇಟು ಮತ್ತು ಬಳಪವನ್ನು ಮತ್ತೆ ಪರಿಚಯಿಸುವುದು ಅತ್ಯಂತ ಯೋಗ್ಯವೆಂಬುದು ಗುಂಪಿನ ಅನಿಸಿಕೆಯಾಗಿತ್ತು. ನಾನು ಮೂರನೆಯ ತರಗತಿಯಲ್ಲಿದ್ದಾಗ ಮೊತ್ತಮೊದಲ

ಬಾರಿಗೆ ಇಂಗ್ಲಿಷ್ ಮಾಧ್ಯಮ ಶಾಲೆಯಿಂದ ಗೌರವಾನ್ವಿತ ಕನ್ನಡ ಮಾಧ್ಯಮ ಶಾಲೆಯೊಂದಕ್ಕೆ ಸ್ಥಳಾಂತರಗೊಂಡೆ. ಆಗ ಕನ್ನಡ ಭಾಷೆಯ ಬರವಣಿಗೆಯ ಮೂಲಭೂತ ಕೌಶಲಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿದ್ದು ಹೀಗೆ ಸ್ಲೇಟಿನ ಮೇಲೆ ಬರೆದು ಮಾಡಿದ ಕಠಿಣ ಅಭ್ಯಾಸವೇ. ನನ್ನ ಈ ಧನಾತ್ಮಕ ಅನುಭವವೇ ಈ ನಿಲುವನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ.

ಇದರಿಂದ, ಮಕ್ಕಳಿಗೆ ತಂತ್ರಜ್ಞಾನ ಅಥವಾ ಮೂಲಭೂತ ಸೌಕರ್ಯಗಳು ಲಭ್ಯವಾಗುವಂತೆ ಮಾಡುವುದರ ಬದಲಾಗಿ, ಮೂಲಭೂತ ಪರಿಕಲ್ಪನೆಗಳನ್ನು ವಿವಿಧ ಹಂತಗಳಲ್ಲಿ ಅತ್ಯಂತ ಪರಿಣಾಮಕಾರಿ ವಿಧಾನದಲ್ಲಿ ಅವರು ಹೇಗೆ ಕಲಿಯುತ್ತಾರೆ ಎನ್ನುವುದನ್ನು ಗುರುತಿಸಬೇಕು ಮತ್ತು ಇಂತಹ ಕಲಿಕೆಯನ್ನು ಅವರಿಗೆ ಒದಗಿಸಬೇಕು ಎನ್ನುವ ಅತ್ಯಂತ ಮುಖ್ಯವಾದ ಹೊಳಹುಗಳು ದೊರಕುತ್ತವೆ. ಈ ಮಾರ್ಗದ ಅರ್ಥ ನಾವು ಎಲ್ಲಾ ಹಳೆಯ ರೀತಿನೀತಿಗಳಿಗೆ ಹಿಂದಿರುಗಬೇಕು ಎಂಬುದಲ್ಲ. ನಾವು ತುಳಿಯುವ ಹಾದಿ ಹಳೆಯದೋ ಅಥವಾ ಸದ್ಯದ್ದೋ ಎನ್ನುವ ಅಂಶವನ್ನು ಬದಿಗಿಟ್ಟು ಉಚಿತವಾದ ಸಮತೋಲನವೊಂದನ್ನು ಕಂಡುಕೊಳ್ಳುವುದು ಹಾಗೂ ಮಾಡಬೇಕಾಗಿರುವುದನ್ನು ಮಾಡುವುದು ಮುಖ್ಯವಾಗುತ್ತದೆ.

ಡಿವಿಜಿಯವರು ತಮ್ಮ ಅತ್ಯಂತ ಖ್ಯಾತ ಹಾಗೂ ಮುಖ್ಯ ಕೃತಿ, 'ಮಂಕುತಿಮ್ಮನ ಕಗ್ಗ'ದಲ್ಲಿನ ಒಂದು ಪದ್ಯದಲ್ಲಿ, ಬದುಕಿನಲ್ಲಿ ಸಂತುಲಿತ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಕರೆ ನೀಡಿದ್ದಾರೆ. ಕೆಳಗೆ ನೀಡಲಾದ ಸಾಲುಗಳಲ್ಲಿ ಹಿಡಿದಿಟ್ಟಿರುವ ಆ ಪದ್ಯದ ಅಂತರಾತ್ಮವು ನಮ್ಮ ಶಿಕ್ಷಣದ ಸಂದರ್ಭದಲ್ಲಿ ಅತ್ಯಂತ ಸೂಕ್ತವಾದುದಾಗಿದೆ.

> ಹೊಸ ಚಿಗುರು ಹಳೆಬೇರು ಕೂಡಿರಲು ಮರ ಸೊಬಗು
> ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ ।
> ಋಷಿವಾಕ್ಯದೊಡನೆ ವಿಜ್ಞಾನಕಲೆ ಮೇಳವಿಸೆ
> ಜಸವು ಜನಜೀವನಕೆ – ಮಂಕುತಿಮ್ಮ ॥

■

ಬಿ ಫಸ್ಟ್, 13–10–2016